ಡಾ॥ ಬಿ. ವಸಂತ ಶೆಟ್ಟಿ

# ದಕ್ಷಿಣಕನ್ನಡ ಜಿಲ್ಲೆಯಲ್ಲಿ ನೂತನ ಶಿಲಾಯುಗ

ಕರ್ನಾಟಕದ ಕರಾವಳಿ ಜಿಲ್ಲೆಯಾದ ದಕ್ಷಿಣಕನ್ನಡದಲ್ಲಿ ಪುರಾತತ್ವ ಸಂಶೋಧನೆ ಇತ್ತೀಚಿನವರೆಗೆ ನಡೆದಿರಲೇ ಇಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಸುಮಾರು ಒಂದೂವರೆ ದಶಕದ ಹಿಂದೆ ಜಿಲ್ಲೆಯ ಇತಿಹಾಸದ ಪ್ರಾರಂಭದ ಬಗ್ಗೆ ಯೋಚಿಸಿದಾಗಲೆಲ್ಲ, ಸ್ಪಷ್ಟ ಪುರಾತತ್ವ ಆಧಾರಗಳ ಕೊರತೆಯಿಂದ, ಕೂಡಲೇ ನೆನಪಿಗೆ ಬರುತ್ತಿದ್ದುದು ಪರಶುರಾಮ ಅರಬ್ಬೀ ಸಮುದ್ರಕ್ಕೆ ಕೊಡಲಿಯನ್ನೆಸೆಯುವ ಮೂಲಕ ಸಮುದ್ರದ ಈ ಭಾಗವನ್ನು ನೆಲವನ್ನಾಗಿ ಪರಿವರ್ತಿಸಿದನೆಂಬ ಕತೆ. ಇದು ಈ ಕರಾವಳಿ ಪ್ರದೇಶದಲ್ಲಿ ಕಾಡನ್ನು ತನ್ನ ಕಬ್ಬಿಣದ ಕೊಡಲಿಯಿಂದ ಕಡಿದು ಆದಿಮಾನವ ಇಲ್ಲಿ ನೆಲೆಸಿದ್ದ ನೆನಪಿನಿಂದ ಹುಟ್ಟಿದ್ದ ಕತೆಯಿರಬಹುದೆಂದು ಸಂಶೋಧಕರು ಊಹಿಸಿದ್ದಿದೆ.[1]

೧೯೭೦ ರ ನಂತರ ದಕ್ಷಿಣಕನ್ನಡದಲ್ಲಿ ಕಬ್ಬಿಣಯುಗದ ಸಂಸ್ಕೃತಿಯ ಇರುವಿಕೆಯನ್ನು ಸ್ಪಷ್ಟಪಡಿಸುವ ಹಲವು ಸಂಶೋಧನೆಗಳನ್ನು ದಿವಂಗತ ಡಾ॥ ಪಿ. ಗುರುರಾಜ ಭಟ್ ಮತ್ತು ಡಾ॥ ಅ. ಸುಂದರ ಮಾಡಿದರು.[2] ಇವರು ಬೃಹತ್‌ಶಿಲಾಕೋಣೆ ಗೋರಿಗಳು, ಮೃತ್ಪಾತ್ರೆಯ ಸಮಾಧಿಗಳು ಹಾಗೂ ಲಾರಟಲೈಟ್ ಕಲ್ಲಿನಲ್ಲಿ ಕೊರೆದ ಗುಹಾಸಮಾಧಿಗಳನ್ನು ಈ ಜಿಲ್ಲೆಯ ಹಲವು ಕಡೆ ಶೋಧಿಸಿದರು.

ನಾನು ಇತ್ತೀಚಿಗೆ ಬೃಹತ್‌ಶಿಲಾಯುಗದ ಹಲವು ಗೋರಿಗಳನ್ನು ಕಂಡುಹಿಡಿದೆ. ಅವುಗಳಲ್ಲಿ ಹೆಚ್ಚಿನವುಗಳು ಮೃದುವಾದ ಕೆಂಪುಕಲ್ಲಿನಲ್ಲಿ ಬೋರಲಾಗಿರಿಸಿದ ಅರ್ಧಗೋಲಾಕಾರದಲ್ಲಿ ಕೊರೆದವುಗಳು. ಆದರೆ ಕಕ್ಕುಂಜೆ ಎಂಬಲ್ಲಿ ನಾನು ಶೋಧಿಸಿದ ಗೋರಿಗಳು ಪೋರ್ಟ್‌ಹೋಲ್ ಇರುವ ಶಿಲಾಕೋಣೆಗೋರಿಗಳು. ಈ ತನ್ಮಧ್ಯೆ ಡಾ॥ ಪಿ. ರಾಜೇಂದ್ರನ್ ೧೯೮೩ರಲ್ಲಿ ನೇತ್ರಾವತಿ ನದಿ ದಡದ ಉಪ್ಪಿನಂಗಡಿ ಹಾಗೂ ಮಾಣಿಯಲ್ಲಿ (ಜಿಲ್ಲೆಯ ತೆಂಕುಭಾಗ) ಮಧ್ಯ ಮತ್ತು ಅಂತ್ಯ ಶಿಲಾಯುಗದ ಸೂಕ್ಷ್ಮ ಶಿಲಾಯುಧಗಳನ್ನು ಕಂಡುಹಿಡಿದಿದ್ದರೂ[3] ನೂತನ ಶಿಲಾಯುಗದ ಯಾವುದೇ ಕುರುಹು ಈ ಜಿಲ್ಲೆಯಲ್ಲಿ ಇದುವರೆಗೆ ದೊರೆತಿರಲಿಲ್ಲ.

ಇತ್ತೀಚೆಗೆ ಉಡುಪಿ ತಾಲ್ಲೂಕಿನ ಬಾರಕೂರಿಗೆ ಸಮೀಪ ಭಂಡಿಮಠದ ಹತ್ತಿರ ಗುಡ್ಡದ ಇಳಿಜಾರಿನ ಬೆಟ್ಟುಗದ್ದೆಯೊಂದರಲ್ಲಿ ಏರಿ ಮಾಡುತ್ತಿದ್ದಾಗ ದೊರೆತ

---

1. ಕೆ.ವಿ. ರಮೇಶ : ತುಳುನಾಡಿನ ಇತಿಹಾಸ, ಉಡುಪಿ, ೧೯೭೯, ಪು. ೧೭
2. P. Gururaj Bhat : Studies in Tuluva History and Culture, Kallianpur, 1975, pp. VI–X ; A. Sundara : *Megaliths in the Western Coast and Ghat Regions of Karnataka*, Journal of Karnatak University, Vol. X
3. P. Rajendran : 'Megalithic Industries from South Kanara, Karnataka', Bulletin of Deccan College Research Institute, Pune, 1983

ಕಲ್ಲೊಂದರ ಆಕಾರದ ಬಗ್ಗೆ ಕುತೂಹಲ ತಾಳಿ ಶ್ರೀ ರಮೇಶ ಆಚಾರಿ ಎಂಬುವರು ವಿಷಯವನ್ನು ನನ್ನ ಗಮನಕ್ಕೆ ತಂದರು. ಈ ಕಲ್ಲನ್ನು ಪರಿಶೀಲಿಸಿದಾಗ ಇದು ನೂತನ ಶಿಲಾಯುಗದ ಕೊಡಲಿ ಎಂಬುದು ಸ್ಪಷ್ಟವಾಯಿತು.

ಈ ಕಲ್ಲಿನ ಕೊಡಲಿ ೧೨.೩ ಸೆಂಟಿಮೀಟರ್ ಉದ್ದ ಮತ್ತು ೬.೪ ಸೆಂಟಿಮೀಟರ್ ಅಗಲ(ಕೆಳಭಾಗ)ವಿದೆ. ಕೊಡಲಿಯ ಮೇಲ್ಭಾಗ ಸ್ವಲ್ಪ ದೊರಗಾಗಿದ್ದು ಕೆಳಭಾಗ ಇದಕ್ಕಿಂತ ಹೆಚ್ಚು ನಯವಾಗಿದೆ. ದೊರಗುಕಲ್ಲನ್ನು ಉಜ್ಜಿ ಚಪ್ಪಟೆ ಹಾಗೂ ಹರಿತವಾಗಿ ಮಾಡಲಾಗಿದೆ. ಪ್ರಾಯಶಃ ಉಪಯೋಗಿಸಿದ್ದರಿಂದ ಹರಿತವಾಗಿದ್ದ ಭಾಗ ಅಲ್ಲಲ್ಲಿ ಎದ್ದುಹೋಗಿದೆ. ಇಲ್ಲಿನ ಪರಿಸರವೂ ನೂತನ ಶಿಲಾಯುಗದ ಜನಜೀವನಕ್ಕೆ ಅನುಕೂಲವಾಗಿತ್ತೆಂಬುದು ಈ ಸ್ಥಳದ ಸರ್ವೇಕ್ಷಣೆಯಿಂದ ತಿಳಿಯಬಹುದಾಗಿದೆ. ಕಲ್ಲಿನ ಆಯುಧ ತಯಾರಿಗೆ ಅಗತ್ಯವಿರುವ ಕಚ್ಚಾವಸ್ತು ಇಲ್ಲಿಯೇ ಇದೆ. ಅಲ್ಲಲ್ಲಿ ಗುಡ್ಡ ಹಾಗೂ ಎತ್ತರ ಪ್ರದೇಶದಲ್ಲಿ ಅನೇಕ ಬಂಡೆ ಕಲ್ಲುಗಳು, ಸೀತಾನದಿಗೆ ತಾಗಿಕೊಂಡಿರುವ ಅಗಲ ಕಿರಿದಾದ ಬಯಲು, ಇತ್ಯಾದಿ ನೂತನ ಶಿಲಾಯುಗದ ಜನರು ತಮ್ಮ ಜೀವನದ ಅಗತ್ಯಗಳನ್ನು ಪೂರೈಸಿಕೊಳ್ಳಲು ಉಪಯುಕ್ತವಾಗಿದ್ದವು.

ಇಲ್ಲಿಂದ ಅನತಿ ದೂರದಲ್ಲೇ ಸೀತಾ ನದಿಯ ತೆಂಕುದಂಡೆಯ ಮೇಲೆ ಬೃಹತ್ ಶಿಲಾಯುಗದ ಗೋರಿಯೊಂದು ಕಂಡುಬಂದಿರುವುದು (ಬೋಳುಗುಡ್ಡೆ) ಹಾಗೂ ಇನ್ನೂ ಒಂದು ಕಿಲೋಮೀಟರ್‌ನಷ್ಟು ಅಂತರದೊಳಗೇ ಇನ್ನೆರಡು ಬೃಹತ್ ಶಿಲಾಯುಗದ ಗೋರಿಗಳು (ಕೆಳಕುಂಜಾಲು ಮತ್ತು ಬ್ರಹ್ಮಾವರ) ನನ್ನ ಸಂಶೋಧನಾ ವೇಳೆಯಲ್ಲಿ ದೊರೆತಿರುವುದು. ಈ ಪ್ರದೇಶ ಬೃಹತ್ ಶಿಲಾಯುಗದ ಸಂಸ್ಕೃತಿಯ ಕೇಂದ್ರವಾಗಿತ್ತೆಂಬುದನ್ನು ದೃಢ ಪಡಿಸುತ್ತವೆ. ಇತಿಹಾಸ ಕಾಲದಲ್ಲಂತೂ ಭಂಡಿಮಠವು ಪ್ರಸಿದ್ಧ ಐತಿಹಾಸಿಕ ಕೇಂದ್ರವಾಗಿದ್ದ ಬಾರಕೂರಿನ ಒಂದು ವಿಸ್ತರಣೆ(extension)ಯಾಗಿ ಕಂಡುಬರುತ್ತದೆ. ಈಗ ಇಲ್ಲಿ ನೂತನ ಶಿಲಾಯುಗದ ಕಲ್ಲಿನ ಕೊಡಲಿಯ ಶೋಧನೆ, ಇನ್ನೂ ಹಿಂದೆ ನೂತನ ಶಿಲಾಯುಗದ ಸಮಯಕ್ಕೇ (ಕ್ರಿ. ಪೂ. ಸುಮಾರು ೨೫೦೦–೧೦೦೦) ಇಲ್ಲಿ ಜನವಸತಿ ಇತ್ತೆಂಬುದನ್ನು ಸ್ಪಷ್ಟಪಡಿಸಿದೆ. ಇಲ್ಲೀಗ ಸಿಕ್ಕಿರುವುದು ಒಂದು ಕೊಡಲಿಯಾದರೂ ಈ ಪರಿಸರ ಹಾಗೂ ಇಲ್ಲಿ ದೊರೆಯುವ ಕಚ್ಚಾವಸ್ತು ಇಲ್ಲಿಯೇ ಈ ಆಯುಧಗಳ ತಯಾರಿ ನಡೆಯುತ್ತಿತ್ತೆಂಬುದನ್ನು ಸೂಚಿಸುತ್ತವೆ.[4] ಈ ಪ್ರದೇಶದಲ್ಲಿ ಹೆಚ್ಚಿನ ಸಂಶೋಧನೆಯಿಂದ ದೊಡ್ಡ ಪ್ರಮಾಣದಲ್ಲಿ ಇಂತಹ ಆಯುಧಗಳು ಇತ್ಯಾದಿ ದೊರೆಯಬೇಕಷ್ಟೆ. ಅಂತೂ ಇನ್ನು ಕಬ್ಬಿಣಯುಗದ ಜನ ತಮ್ಮ ಕೊಡಲಿಯ ಉಪಯೋಗದಿಂದ ಕಾಡನ್ನು ಕಡಿದು ಇಲ್ಲಿ ಪ್ರಪ್ರಥಮವಾಗಿ ನೆಲೆಸಿದರೆಂಬ ಊಹೆಗೆ ಎಡೆಯಿಲ್ಲ.

ಕರ್ನಾಟಕದಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ವಿಸ್ತರಣೆ ಪಶ್ಚಿಮದಲ್ಲಿ ಉತ್ತರಕನ್ನಡ ಜಿಲ್ಲೆ ಹಾಗೂ ಮಲೆನಾಡಿನ ಶಿವಮೊಗ್ಗ ಜಿಲ್ಲೆಯವರೆಗೆ ಇತ್ತೆಂಬುದನ್ನು ಈಗಾಗಲೇ ಡಾ॥ ಸುಂದರ ಮತ್ತು ಡಾ॥ ಎ. ವಿ. ನರಸಿಂಹಮೂರ್ತಿಯವರು ಪ್ರಕಟಿಸಿದ್ದು, ಈಗ ಈ ನೂತನ ಶಿಲಾಯುಗ ಸಂಸ್ಕೃತಿ ದಕ್ಷಿಣಕನ್ನಡದಲ್ಲೂ ಪಸರಿಸಿತ್ತೆಂಬುದು ತಿಳಿದಂತಾಗಿದೆ.

4. H. D. Sankalia : Indian Archaeology Today, p. 78

5. ಈ ಲೇಖನ ತಯಾರಿಗೆ ಡಾ॥ ಎ. ವಿ. ನರಸಿಂಹಮೂರ್ತಿಯವರು ನೀಡಿದ ಸಲಹೆ ಸೂಚನೆಗಳಿಗೆ ಈ ಲೇಖಕ ಋಣಿ.